ಸದನದಲ್ಲಿ ಉತ್ತರಿಸುವ ಪ್ರಶ್ನೆ



ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತೆರಡನೆಯ ಅಧಿವೇಶನ

ಸೋಮವಾರ, ದಿನಾಂಕ : 07 ನೇ ಡಿಸೆಂಬರ್, 2020

ಕೋವಿಡ್-19 ರ ಸೋಂಕಿತರ ಮಾಹಿತಿ ಬಗ್ಗೆ

ಶ್ರೀ ಎಂ. ನಾರಾಯಣಸ್ವಾಮಿ(ಸ್ಥಳೀಯ ಸಂಸ್ಥೆಗಳ ಕ್ಷೇತ್ರ) –

09 (55) ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಮತ್ತು ವೈದ್ಯಕೀಯ ಶಿಕ್ಷಣ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ –

(ಅ) ನಗರದಲ್ಲಿ ಕೋವಿಡ್-19ರ ಸೋಂಕಿತರನ್ನು ವಿವಿಧ ಖಾಸಗಿ ಏಜೆನ್ಸಿಗಳು ಸಂಪರ್ಕಿಸಿ ಕಟ್ಟಡಗಳಿಗೆ ಸೋಂಕು ನಿವಾರಣಾ ದ್ರವ ಸಿಂಪಡಣೆ ಸೇರಿದಂತೆ ವಿವಿಧ ಸೌಲಭ್ಯಗಳನ್ನು ಒದಗಿಸುವುದಾಗಿ ದುಂಬಾಲು ಬೀಳುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ;

(ಆ) ಕೋವಿಡ್ ಪೀಡಿತರ ಮಾಹಿತಿಯಲ್ಲಿ ಗೌಪ್ಯತೆ ಕಾಪಾಡದೆ ಖಾಸಗಿ ಏಜೆನ್ಸಿಗಳಿಗೆ ಮಾಹಿತಿ ಲಭ್ಯವಾಗುತ್ತಿರುವುದಕ್ಕೆ ಕಾರಣರ್ಯಾರು;

(ಇ) ಮಾಹಿತಿ ಗೌಪ್ಯತೆಯನ್ನು ಕಾಪಾಡದಿದ್ದರೆ ಅದು ಅಪರಾಧವಾಗುವುದಿಲ್ಲವೇ; ಈ ಬಗ್ಗೆ ಸಂಬಂಧಪಟ್ಟ ಅಧಿಕಾರಿ/ಸಿಬ್ಬಂದಿಯವರ ವಿರುದ್ಧ ಯಾವ ಕ್ರಮ ಕೈಗೊಳ್ಳಲಾಗಿದೆ? (ವಿವರ ನೀಡುವುದು)